# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

'MUNJAVU' Kannada Weekly. KOPPA - CHM. ಫೋನ್: 114

6ನೇ ವರ್ಷ 8ನೇ ಸಂಚಿಕೆ ಕೊಪ್ಪ 18-10-1987 ಭಾನುವಾರ ಬೆಲೆ 50 ಪೈಸೆ


## ಜಿಲ್ಲೆಯ ಕಾಫಿ ಬೆಳೆಗಾರರಿಗೊಂದು ಸೂಚನೆ

ಸಾಮಾನ್ಯವಾಗಿ ಅಕ್ಟೋಬರ್ ತಿಂಗಳಲ್ಲಿ ಕಾಫಿ ತೋಟಗಳಲ್ಲಿ ಕಂಬಳಿ ಹುಳು ಕಾಣಿಸಿಕೊಳ್ಳುವ ಸಂಭವವಿದ್ದು, ಈಗಾಗಲೇ ಚಿಕ್ಕಮಗಳೂರು ತಾಲ್ಲೂಕಿನ ಆವತಿ ಮತ್ತು ಚಿಕ್ಕನಹಳ್ಳಿ ಪ್ರದೇಶಗಳಲ್ಲಿ ಇವು ಕಾಣಿಸಿಕೊಂಡಿವೆ. ಆದ್ದರಿಂದ ಕಾಫಿ ಬೆಳೆಗಾರರು ಕಂಬಳಿ ಹುಳು ಹತೋಟಿಗಾಗಿ ಕೆಳಕಂಡ ಕ್ರಮಗಳನ್ನು ಅನುಸರಿಸುವಂತೆ ಕಾಫಿ ಮಂಡಳಿ ಸೂಚಿಸಿದೆ.:

1. ಕಂಬಳಿ ಹುಳುಗಳು ಕಾಫಿ ಗಿಡಗಳ ಎಲೆಗಳನ್ನು ತಿನ್ನಲಾರಂಭಿಸಿದ ಸಂದರ್ಭಗಳಲ್ಲಿ, 320 ಮಿ.ಲೀ. ಎಕಲಾಕ್ಸ್ 25 ಇ. ಸಿ ಅಥವಾ 160 ಮಿ.ಲೀ. ಮೆಟಾಸಿಡ್ 50 ಇ.ಸಿ. ಅಥವಾ 240 ಮಿ.ಲೀ. ಸುಮಿಥಿಯಾನ್ 50 ಇ.ಸಿ. ಇವುಗಳಲ್ಲಿ ಯಾವುದಾದರೊಂದು ಕ್ರಿಮಿನಾಶಕವನ್ನು 200 ಲೀಟರ್ ನೀರು ಅಥವಾ ಬೋರ್ಡೋ ಮಿಶ್ರಣದಲ್ಲಿ ಬೆರೆಸಿ ಎಲೆಗಳ ತಳಭಾಗ ಚೆನ್ನಾಗಿ ನೆನೆಯುವಂತೆ ಸಿಂಪಡಿಸಬೇಕು.

2 ಡಸ್ಟ್ ಬ್ಲೋಯರ್ ಸಹಾಯದಿಂದ ಕಾಫಿ ಗಿಡಗಳ ಮೇಲೆ ಶೇಕಡಾ 2ರ ಫಾಲಿಡಾಲ್ ಹುಡಿಯನ್ನು ಉದುರಿಸಬೇಕು.

3. ನೆರಳಿನ ಮರಗಳ ಬುಡಗಳಲ್ಲಿ ಗುಂಪು ಗುಂಪಾಗಿರುವ ಕಂಬಳಿ ಹುಳುಗಳ ಸಮೂಹಗಳನ್ನು ಕೊಲ್ಲಬೇಕು.

4. ತರಗಿನ ಕೆಳಗಡೆಯಲ್ಲಿರುವ ಕಂಬಳಿ ಹುಳುವಿನ ಕೋಶಗಳನ್ನು ಆಯ್ದು ನಾಶಪಡಿಸಬೇಕು.

5. ಜೂನ್, ಜುಲೈ ತಿಂಗಳಲ್ಲಿ ಪ್ರಕಾಶಮಾನವಾದ ದೀಪಗಳನ್ನು ತೋಟಗಳಲ್ಲಿ ಬೆಳಗಿಸಿ ಪತಂಗಗಳನ್ನು ಕೊಲ್ಲಬಹುದು.

# ಜಿಲ್ಲಾ ಪರಿಷತ್ತು ಯಶಸ್ವಿಯಾಗದಿದ್ದರೆ ಪ್ರಜಾಪ್ರಭುತ್ವಕ್ಕೇ ಕುಂದು — ಶಂಕರ್

**ಶೃಂಗೇರಿ : ರಾಜ್ಯ ಸರ್ಕಾರ ಕೈಗೊಂಡಿರುವ ಅಧಿಕಾರ ವಿಕೇಂದ್ರೀಕರಣದ ಜಿಲ್ಲಾ ಪರಿಷತ್ ವ್ಯವಸ್ಥೆ ಯಶಸ್ವಿಯಾಗುತ್ತದೆ ಇದು ಫಲಕಾರಿಯಾಗದಿದ್ದರೆ ಪ್ರಜಾಪ್ರಭುತ್ವಕ್ಕೇ ಕುಂದು ಎಂದು ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವ ಬಿ. ಎಲ್ ಶಂಕರ್ ಅಭಿಪ್ರಾಯಪಟ್ಟರು.**

ಅ. 13ರಂದು ಇಲ್ಲಿಗೆ ಸಮೀಪದ ಮೆಣಸೆಯಲ್ಲಿ ಜೇನು ಸಾಕಾಣಿಕೆ ಕೇಂದ್ರವನ್ನೂ ಧರೆಕೊಪ್ಪದಲ್ಲಿ "ಕಿರು ನೀರು ಸರಬರಾಜು ಯೋಜನೆಯನ್ನೂ ಉದ್ಘಾಟಿಸಿ ಮಾತನಾಡಿದ ಅವರು, ಈ ಹೊಸ ವ್ಯವಸ್ಥೆ ಒಂದು ಹೊಸ ಸಂಸಾರದಂತೆ. ಆದ್ದರಿಂದ ಕಾರ್ಯಕ್ರಮಗಳು ಸ್ವಲ್ಪ ಮಟ್ಟಿಗೆ ಕುಂಠಿತವಾಗಿವೆ. ತಾವೆಲ್ಲ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು ಸಹಕರಿಸಿದರೆ ಖಂಡಿತ ಯಶಸ್ಸು ಸಾಧ್ಯ ಎಂದರು.

ಶೃಂಗೇರಿ ಕ್ಷೇತ್ರವು ಚಿಕ್ಕಮಗಳೂರು ಜಿಲ್ಲೆಯಲ್ಲೇ ಅತಿ ಹೆಚ್ಚು ಅಭಿವೃದ್ಧಿ ಕಾರ್ಯಕ್ರಮಗಳನ್ನು ಪಡೆದುಕೊಂಡಿದೆ ಇದಕ್ಕೆ ಶಾಸಕ ಗೋವಿಂದ ಗೌಡರ ಪ್ರಾಮಾಣಿಕ ಪ್ರಯತ್ನವೇ ಕಾರಣ. (ಎರಡನೇ ಸ್ಥಾನದಲ್ಲಿ ಬೀರೂರು) ಎಂದು ಶ್ಲಾಘಿಸಿದರು.

## 'ಕಾಡು ಪ್ರಾಣಿ ರಕ್ಷಿತ ಪ್ರದೇಶ' ಆಜ್ಞೆಯಿಂದ ರೈತರಿಗೆ ತೊಂದರೆಯಾಗದಂತೆ ಕ್ರಮ

(ವರದಿ : ಕಲ್ಕುಳಿ ವಿಠಲ ಹೆಗ್ಡೆ)

ನೆಮ್ಮಾರು: ಈ ಪ್ರದೇಶವನ್ನು 'ಕಾಡು ಪ್ರಾಣಿಗಳ ರಕ್ಷಿತ ಪ್ರದೇಶ'ವೆಂದು ಸರ್ಕಾರ ಘೋಷಿಸಿದೆ ಎನ್ನಲಾಗಿರುವ ಹಿನ್ನೆಲೆಯಲ್ಲಿ, ಅಲ್ಲಿ ಈಗಾಗಲೇ ಮನೆ–ಜಮೀನು ಹೊಂದಿರುವವರಿಗೆ ತೊಂದರೆ ಆಗದಂತೆ ಕ್ರಮ ಕೈಗೊಳ್ಳಲು ಸಚಿವ ಬಿ. ಎಲ್. ಶಂಕರ್ ಅರಣ್ಯ ಇಲಾಖೆ ಅಧಿಕಾರಿಗಳಿಗೆ ಸೂಚಿಸಿದರು.

"ಇಂಥ ಎಲ್ಲಾ ಹಿಡುವಳಿ ಜಮೀನುಗಳ ಪಟ್ಟಿ ತಯಾರಿಸಿ ಕಳಿಸಿಕೊಡಿ. ಯಾವುದೇ ಕಾರಣಕ್ಕೂ ಬಡವರಿಗೆ ತೊಂದರೆ ಆಗಕೂಡದು. ಉಳಿದ ಅರಣ್ಯ ಭೂಮಿಯಲ್ಲಿ ಅಕ್ರಮ ಸಾಗುವಳಿ ಮಾಡಿಕೊಂಡಿರುವವರದೂ ಪ್ರತ್ಯೇಕ ಪಟ್ಟಿ ಮಾಡಿ" ಎಂದ ಅಧಿಕಾರಿಗಳಿಗೆ ಹೇಳಿದ ಅವರು, ರಾಜ್ಯ ಸರ್ಕಾರದಿಂದ ಅಂತಹ ಜಾಗವನ್ನು ಅರಣ್ಯ ಇಲಾಖೆಯಿಂದ ತೆರವು ಮಾಡಿಸಿಕೊಡುವ ಪ್ರಯತ್ನ ಮಾಡುವುದಾಗಿ ತಿಳಿಸಿದರು.

ಅವರು ಅ 13ರಂದು ಇಲ್ಲಿನ ಮಂಡಲ ಕಚೇರಿಗೆ ಭೇಟಿ ಕೊಟ್ಟು ಸ್ಥಳೀಯ ಸಮಸ್ಯೆಗಳನ್ನು ಚರ್ಚಿಸುತ್ತಿದ್ದಾಗ, ಈ ಮಂಡಲದ ಬಹುತೇಕ ಜಾಗ ಅರಣ್ಯ ಇಲಾಖೆಗೆ ಸೇರಿದ್ದು, ಬಡವರಿಗೆ ನಿವೇಶನ ಕೊಡಲು ಕೂಡ ಸ್ಥಳವಿಲ್ಲವಾಗಿದೆ; ಆದರೂ ಅದರೊಳಗೇ ನೂರಾರು ವರ್ಷಗಳಿಂದ ಜನ ವಾಸವಾಗಿದ್ದಾರೆ ಈಗೊಂದು ವಾರದ ಹಿಂದೆ ಈ ಪ್ರದೇಶ (ತುಂಗಭದ್ರಾ ಸ್ಟೇಟ್ ಫಾರೆಸ್ಟ್)ವನ್ನು ಕಾಡು ಪ್ರಾಣಿಗಳ ರಕ್ಷಿತ ಪ್ರದೇಶ ಎಂದು ಘೋಷಿಸಿರುವುದಾಗಿ ತಿಳಿದು ಬಂದಿದೆ. ಹೀಗಾದಲ್ಲಿ, ಇಲ್ಲಿನ ಜನರ ಪುನರ್ವಸತಿಗೆ ಏನೊಂದು ದಾಖಲೆಯೂ ಅವರ ಬಳಿ ಇಲ್ಲ — ಎಂಬುದಾಗಿ ಗ್ರಾಮಸ್ಥರು ತಿಳಿಸಿದಾಗ ಸಚಿವರು ಮೇಲಿನಂತೆ ಆದೇಶಿಸಿದರು.

ಅತಿ ವಿಸ್ತಾರ ಪ್ರದೇಶವೂ ಅತಿ ವಿರಳ ಜನಸಂಖ್ಯೆಯೂ, ಅರ್ಧಕ್ಕರ್ಧ ಗಿರಿಜನ ಸಮುದಾಯವೂ ಇರುವ ಈ ಮಂಡಲದಲ್ಲಿ ರಸ್ತೆ ಮುಂತಾದ ಪ್ರತಿಯೊಂದು ವ್ಯವಸ್ಥೆಗೂ ಅತಿ ಹೆಚ್ಚು ಹಣ ಬೇಕಾಗಿದ್ದು, ತಲಾ ಅನುದಾನದ ಹಣ ಏನೇನೂ ಸಾಲದು ಎಂದು ಪ್ರಧಾನ ಸುಧಾಕರ ಹೆಗ್ಡೆ ಸಚಿವರಿಗೆ ಮನವಿ ಮಾಡಿದರು.

## ನೆಮ್ಮಾರು ಹಂದಿ ಸಾಕಣೆ ಕೇಂದ್ರ ಮುಂದುವರಿಸುವ ಭರವಸೆ

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ : ಈ ತಾಲ್ಲೂಕಿಗೆ ಅ. 13ರಂದು ಭೇಟಿ ಕೊಟ್ಟಿದ್ದ ಸಚಿವ ಬಿ. ಎಲ್. ಶಂಕರ್ ಮತ್ತು ಜಿ. ಪ. ಅಧ್ಯಕ್ಷ ಕೃಷ್ಣಮೂರ್ತಿ ಇವರುಗಳು ಶಾಸಕ ಗೋವಿಂದ ಗೌಡರು ಮತ್ತು ಕಚ್ಚೋಡಿ ಶ್ರೀನಿವಾಸ್ ಇವರುಗಳೊಂದಿಗೆ ನೆಮ್ಮಾರಿನ ಹಂದಿ ಸಾಕಣೆ ಕೇಂದ್ರಕ್ಕೆ ಭೇಟಿ ನೀಡಿ, ಯೋಜನೆ ವ್ಯವಸ್ಥಿತವಾಗಿ ಮುಂದುವರಿಯಲು ತಕ್ಕ ಏರ್ಪಾಡು ಮಾಡುವುದಾಗಿ ಭರವಸೆ ಕೊಟ್ಟರು.

ಕೇಂದ್ರದ ಹಣಕಾಸಿನ ನಿರ್ವಹಣೆಯ ಆಡಿಟ್ ವರದಿ ಬಂದಿದೆ. ಎರಡು ಪ್ರತ್ಯೇಕ ಇಲಾಖೆಗಳಾದ್ದರಿಂದ ಇಷ್ಟು ತಡವಾಗಿದೆ. ಅವತೆ ಅವ್ಯವಹಾರ ನಡೆದಿರುವುದು ಸಾಬೀತಾಗಿದೆ. ತಪ್ಪಿತಸ್ಥರು ಎಷ್ಟೇ ಪ್ರಭಾವಿಯಾಗಿದ್ದರೂ 'ಬಚಾವು' ಮಾಡುವುದಿಲ್ಲ ಎಂದ ಜಿ ಪ. ಅಧ್ಯಕ್ಷರು, ನೆಮ್ಮಾರು ಮಂಡಲದ ಪ್ರಧಾನ, ಉಪ ಪ್ರಧಾನರನ್ನು ಅ. 16ಕ್ಕೆ ಚಿಕ್ಕಮಗಳೂರಿಗೆ ಬರಲು ತಿಳಿಸಿ, ಅಂದು ಅವರಿಗೆ ಆಡಿಟ್ ವರದಿಯ ಪ್ರತಿ ಒದಗಿಸುವುದಲ್ಲದೆ, ತಪ್ಪಿತಸ್ಥರ ಮೇಲೆ ಖಂಡಿತ ಕ್ರಮ ತೆಗೆದುಕೊಂಡು ಅದರ ವಿವರ ತಿಳಿಸುವುದಾಗಿ ಭರವಸೆಯಿತ್ತರು.

ಅವರ ಈ ಗಡುವನ್ನು ದಲಿತ ಸಂಘರ್ಷ ಸಮಿತಿ ಎದುರು ನೋಡುತ್ತಿದ್ದು, ತೃಪ್ತಿಕರವಾದ ಕ್ರಮ ಜರುಗದಿದ್ದಲ್ಲಿ ಮುಂದೆ ಚಳುವಳಿ ತೀವ್ರಗೊಳಿಸಲು ನಿರ್ಧರಿಸಿದೆ.

## ಹರಾಜಿನಲ್ಲಿ ಕೊಂಡ ನಿವೇಶನಗಳಿಗೆ ಹಕ್ಕು ಪತ್ರ ಕೊಡಿಸಲು ಕೋರಿ ಜಿಲ್ಲಾ ಪರಿಷತ್ ಅಧ್ಯಕ್ಷರಿಗೆ ಮನವಿ ಪತ್ರ

**ಕೊಪ್ಪ : ಇಲ್ಲಿನ ಪುರಸಭೆ 1985ರಲ್ಲಿ ಹರಾಜು ಮೂಲಕ ತಮಗೆ ನೀಡಿದ ನಿವೇಶನಗಳಿಗೆ ಕೂಡಲೇ ಹಕ್ಕು ಪತ್ರ ಕೊಡಿಸಬೇಕೆಂದು ಕೋರಿ ಇಂದಿರಾ ನಗರದ ಕೆಲವುಂದಿ ನಿವೇಶನದಾರರು ಜಿಲ್ಲಾ ಪರಿಷತ್ ಅಧ್ಯಕ್ಷರಿಗೆ ಮನವಿಯೊಂದನ್ನು ಕಳಿಸಿದ್ದಾರೆ.**

ಈ ನಿವೇಶನಗಳಿಗೆ ಪುರಸಭೆಯು ಅಸೆಸ್‌ಮೆಂಟ್ ನಂ. ಸಹ ನೀಡಲಾಗಿದ್ದು, ಪೂರ್ಣ ಹಣವನ್ನು ಆಗಲೇ ಪಾವತಿ ಮಾಡಿಸಿಕೊಂಡು ರಸೀದಿ ಕೂಡ ನೀಡಲಾಗಿದೆ ಆದರೆ ಈ ಹರಾಜಿಗೆ 'ಸರ್ಕಾರದ ಮಂಜೂರಾತಿ' ದೊರೆತಿಲ್ಲವೆಂಬ ಕಾರಣಕ್ಕೆ ಇನ್ನೂ ಹಕ್ಕು ಪತ್ರವನ್ನು ನೀಡಿಲ್ಲ. ಇದರಿಂದ ಬಹುಪಾಲು ಸರ್ಕಾರಿ ನೌಕರರೇ ಆಗಿರುವ ಈ ನಿವೇಶನದಾರರುಗಳು ಮನೆ ಸಾಲ ಪಡೆಯಲು ಸಾಧ್ಯವಿಲ್ಲವಾಗಿದೆ ಎಂದು ಮನವಿಯಲ್ಲಿ ತಿಳಿಸಲಾಗಿದೆ.

ಈ ಬಗ್ಗೆ ಜಿಲ್ಲಾಧಿಕಾರಿಗಳಿಗೆ, ವಿಭಾಗಾಧಿಕಾರಿಗಳಿಗೆ ಕೂಡ ಮನವಿ ಸಲ್ಲಿಸಿದ್ದರೂ ಪ್ರಯೋಜನವಾಗಿಲ್ಲವೆಂದಿರುವ ಮನವಿದಾರರು, ಕೂಡಲೇ ಹಕ್ಕು ಪತ್ರ ಕೊಡಿಸುವಂತೆಯೂ. ಅದು ಸಾಧ್ಯವಿಲ್ಲದಿದ್ದರೆ ತಾವು ಕಟ್ಟಿರುವ ಹಣವನ್ನಾದರೂ ಕೂಡಲೇ ವಾಪಸ್ ಕೊಡಿಸುವಂತೆಯೂ ಒತ್ತಾಯಿಸಿದ್ದಾರೆ.

### 3 ದಶಕದಿಂದಲೂ !

ವಾಸ್ತವವಾಗಿ ಸುಮಾರು 3 ದಶಕದಿಂದಲೂ (ಸುಮಾರು 60–62ನೇ ಇಸವಿಯಿಂದೀಚೆಗೆ) ಪುರಸಭೆ ಮಂಜೂರು ಮಾಡಿದ ಬಹುತೇಕ ಯಾವ ನಿವೇಶನಕ್ಕೂ ಹಕ್ಕು ಪತ್ರ ನೀಡಲಾಗಿಲ್ಲವೆಂದು ಹೇಳಲಾಗುತ್ತಿದೆ. ಕಾರಣವೆಂದರೆ, ಪುರಸಭೆ ಮಾಡಿದ ಯಾವುದೇ ನಿರ್ಣಯಕ್ಕೆ ಜಿಲ್ಲಾಧಿಕಾರಿಗಳ ಒಪ್ಪಿಗೆ ಅಥವಾ ಮೇಲು ಸಹಿ( ಕೌಂಟರ್-ಸಿಗ್ನೆಚರ್) ಬೇಕಾಗುತ್ತದೆ. ಆದರೆ ಮೇಲೆ ಹೇಳಿದಂತೆ ಯಾವುದೇ ನಿವೇಶನ ಹರಾಜಿನ ಬಗೆಗೂ ಈ ಅನುಮೋದನೆ ದೊರೆತಿಲ್ಲವೆನ್ನಲಾಗಿದೆ. ಪುರಸಭೆಯಲ್ಲಿ ಮಾತ್ರ ಆ ನಿವೇಶನದಾರರಿಗೆಲ್ಲ ಖಾತೆ, ಅಸೆಸ್‌ಮೆಂಟ್ ಮುಂತಾದುವನ್ನೆಲ್ಲ ಅನೂಚಾನವಾಗಿ ಮಾಡಿಕೊಂಡು ಬಂದಿದ್ದು, ಸ್ವಂತ ಹಣದಲ್ಲಿ ಮನೆ ಕಟ್ಟಿಸುವವರಿಗೆ ಏನೂ ತೊಂದರೆಯಾಗಿಲ್ಲ. ಆದರೆ ಬ್ಯಾಂಕ್, ಗೃಹ ನಿರ್ಮಾಣ ಸಂಘ, ಸರ್ಕಾರಿ ಇಲಾಖೆಗಳು ಮುಂತಾದ ಕಡೆಗಳಿಂದ ಗೃಹನಿರ್ಮಾಣ

(4ನೇ ಪುಟಕ್ಕೆ)




### ಎ. ಇ. ಒ. ರೆಡ್ಡಿಯವರ ನಿಃಸ್ವಾರ್ಥ ಸೇವೆಯ ಫಲ

# ನರಸಿಂಹರಾಜಪುರಕ್ಕೊಂದು ಉತ್ತಮ ಕ್ರೀಡಾಂಗಣ

ಶಾಲೆ-ಕಾಲೇಜು ವಿದ್ಯಾಭ್ಯಾಸ, ಉದ್ಯೋಗ ಮುಂತಾದ ದೈನಂದಿನ ಚಟುವಟಿಕೆಗಳ ಜೊತೆಗೆ ಆಟೋಟ, ಸಾಂಸ್ಕೃತಿಕ ಮತ್ತಿತರ ಚಟುವಟಿಕೆಗಳೂ ವ್ಯಕ್ತಿಯ ಸರ್ವಾಂಗೀಣ ಪ್ರಗತಿಗೆ ಅತ್ಯಗತ್ಯ ಎಂಬ ಅರಿವಿನೊಂದಿಗೆ ಈ ದಶಕದಲ್ಲಿ ಶಾಲಾ ಕಾಲೇಜುಗಳಲ್ಲೂ, ಒಟ್ಟಾರೆ ಸಮಾಜದಲ್ಲೂ ಕ್ರೀಡೆಗೆ ಪ್ರೋತ್ಸಾಹ ಹೆಚ್ಚಬೇಕೆಂಬ ಅರಿವೂ, ಪ್ರೋತ್ಸಾಹದ ಮಾತೂ ಹೆಚ್ಚಿದೆ, ಆದರೆ ಮುಖ್ಯವಾಗಿ ಆರ್ಥಿಕ ಮುಗ್ಗಟ್ಟಿನಿಂದಾಗಿ ಈ ದಿಕ್ಕಿನಲ್ಲಿ ನಿರೀಕ್ಷಿತ ಸೌಲಭ್ಯಗಳ ಉತ್ತೇಜನ ಎಲ್ಲಿಡೆ ದೊರೆಯುತ್ತಿಲ್ಲ.

ಹಾಗೆಂದು ಕೈಕಟ್ಟಿ ಕೂರದೆ ಸ್ಥಳೀಯ ಹಿತೈಷಿಗಳಿಂದ ಸಂಪನ್ಮೂಲಗಳನ್ನು ಒಟ್ಟುಗೂಡಿಸಿ ಕ್ರೀಡಾಂಗಣ ಮತ್ತಿತರ ಸೌಕರ್ಯಗಳನ್ನು ಸೃಷ್ಟಿಸುವ ನಿಃಸ್ವಾರ್ಥಿಗಳಾದ ಹಲವು ಜನ ಅಲ್ಲಲ್ಲಿ ಕಾಣಸಿಗುತ್ತಾರೆ. ಇಂಥವರಲ್ಲೊಬ್ಬರು ನರಸಿಂಹರಾಜಪುರದ ಸಹಾಯಕ ವಿದ್ಯಾಧಿಕಾರಿಗಳಾದ ಶ್ರೀಯುತ ಸತ್ಯನಾರಾಯಣ ರೆಡ್ಡಿಯವರು.

ಕ್ರೀಡಾಂಗಣ ನಿರ್ಮಾಣ ತಮ್ಮ 'ಅಧಿಕೃತ' ಕಾರ್ಯ ನಿರ್ವಹಣೆಯ ಚೌಕಟ್ಟಿಗೆ ಬಾರದಿದ್ದರೂ ಸಹ ಇವರು ಊರಿನ ದಾನಿಗಳನ್ನು, ರಾಜಕಾರಣಿಗಳನ್ನು, ಅಧಿಕಾರಿಗಳನ್ನು ಪ್ರೇರೇಪಿಸಿ, ಅವರಿಂದ ಸಹಕಾರ ಪಡೆದು, ಸುಮಾರು 50 ಸಾವಿರ ರೂ. ವೆಚ್ಚದಲ್ಲಿ 200 ಮೀಟರಿಗಿಂತ ಹೆಚ್ಚು ಟ್ರ್ಯಾಕ್ ಉಳ್ಳ ಕ್ರೀಡಾಂಗಣವನ್ನು ನಿರ್ಮಿಸಿದ್ದಾರೆ. ಅಷ್ಟಕ್ಕೆ ತೃಪ್ತರಾಗದೆ 400 ಮೀ. ಟ್ರ್ಯಾಕ್ ರಚನೆಯ ಗುರಿ ಇಟ್ಟುಕೊಂಡಿದ್ದಾರೆ. ಈಬಾರಿಯ ಜಿಲ್ಲಾ ಮಟ್ಟದ ಪ್ರಾಥಮಿಕ ಶಾಲಾ ಕ್ರೀಡಾಕೂಟ ಇವರ ನೇತೃತ್ವದಲ್ಲಿ ಇದೇ ಕ್ರೀಡಾಂಗಣದಲ್ಲೇ ಯಶಸ್ವಿಯಾಗಿ ನಡೆಯಿತು.

ಈ ಕ್ರೀಡಾಂಗಣಕ್ಕಾಗಿ ನ.ರಾ ಪುರದ ಶ್ರೀಯುತ ಎಚ್. ಎಸ್. ನಿರ್ವಾಣಪ್ಪ ಮತ್ತು ಮಕ್ಕಳು ಈ ಹಿಂದೆಯೇ 3 ಎಕರೆ 7ಗುಂಟೆ ಸ್ಥಳವನ್ನು ನೀಡಿದ್ದರು. ರೆಡ್ಡಿಯವರ ಉತ್ಸಾಹ ಮತ್ತು ಊರಿನ ಹಿತಾಸಕ್ತಿಯನ್ನು ಬಯಸಿ ಹೆಬ್ಬೆ ಶೇಷಪ್ಪಗೌಡರೂ ತಮ್ಮ 2 ಎಕರೆ ಸ್ಥಳವನ್ನು ನೀಡಿ ಈ ಕಾರ್ಯಕ್ಕೆ ಪ್ರೋತ್ಸಾಹಿಸಿದರು,

ಶಾಸಕ ಶ್ರೀ ಗೋವಿಂದ ಗೌಡರು, ಮೂಗಾ ಚಂದ್ರಶೇಖರ್, ರಾಜು, ಡಿ.ಸಿ. ದಿವಾಕರ್, ಸೈಯದ್ ಅಹಮದ್, ಎಚ್.ಟಿ. ರಾಜೇಂದ್ರ, ಡಾ|| ಉಮೇಶ್ ಹೆಗ್ಡೆ, ಶಾಂತಕುಮಾರ್, ಎಚ್. ಸಿ. ಕೃಷ್ಣಪ್ಪಗೌಡ, ಎಲ್. ಎಂ. ಸತೀಶ್, ಮುಂತಾದ ಸ್ಥಳೀಯ ಮುಂದಾಳುಗಳು, ಶಿವಮೊಗ್ಗದ ಅರಣ್ಯ ಸಂರಕ್ಷಣಾಧಿಕಾರಿ ಎ. ಸಿ. ಲಕ್ಷ್ಮಣ್, ವಲಯ ಅರಣ್ಯಾಧಿಕಾರಿ ಲಕ್ಷ್ಮೀನಾರಯಣ್, ಪ್ರಿನ್ಸಿಪಾಲರಾದ ನಂಜುಂಡ ಭಟ್, ಈ ಊರಿನವರೇ ಆದ ಕನಕಪುರದ ತಹಸೀಲ್ದಾರ್ ಎಸ್. ಆರ್. ವೆಂಕಟೇಶ್ ಮುಂತಾದ ಅಧಿಕಾರಿಗಳು ತಮ್ಮ ಪ್ರಭಾವ, ಸಹಕಾರ ನೀಡಿ ತಮ್ಮಹಿತೈಷಿಗಳಿಂದಹಣಕಾಸಿನ ನೆರವನ್ನು ಕೊಡಿಸಿದ್ದಾರೆ.

ಈ ಕ್ರೀಡಾಂಗಣ 400 ಮೀ. ಟ್ರ್ಯಾಕ್‌ನೊಂದಿಗೆ ಪೂರ್ಣಗೊಳ್ಳಬೇಕಾದರೆ ಇನ್ನೂ ಸುಮಾರು 40 ಸಾವಿರ ರೂ. ಬೇಕು. ರೆಡ್ಡಿಯವರು ಮತ್ತು ಊರಿನ ಜನತೆ ಈ ಹಣವನ್ನು ಸರ್ಕಾರ ಕೊಡಲೆಂದು ಆರ್ಹವಾಗಿ ನಿರೀಕ್ಷಿಸುತ್ತಿದ್ದಾರೆ. ಸ್ಥಳೀಯ ಶಾಸಕರು ಮತ್ತು ಜಿಲ್ಲೆಯವರೇ ಆದ ಕ್ರೀಡಾ ಮಂತ್ರಿ ಬಿ. ಎಲ್. ಶಂಕರ್ ಅವರುಗಳು ಊರಿನ ಈ ಅಗತ್ಯವನ್ನು ಪೂರೈಸಿಕೊಟ್ಟರೆ, **ಇಂಥ ಅಧಿಕಾರಿಗಳ ನಿಸ್ವಾರ್ಥ ಸೇವೆಗೆ ಹಾಗೂ ಊರಿನವರ ಕೊಡುಗೈ ದೇಣಿಗೆಗೆ ಸೂಕ್ತ ಪುರಸ್ಕಾರ ಸಿಕ್ಕಂತಾಗುತ್ತದೆ.**

1985-86ರಲ್ಲಿ ನಡೆದ ತಾ|| ಮಟ್ಟದ ಪ್ರೌಢಶಾಲಾ ಕ್ರೀಡಾಕೂಡದ 100 ಮೀ. ಓಟದಲ್ಲಿ ಮೊದಲ ಸ್ಥಾನ ಪಡೆದ ಸ್ಪರ್ಧಿಯು ಸ್ಥಳಾಭಾವದಿಂದ ಓಟ ಮುಗಿದೊಡನೆ ಅಲ್ಲೇ ಇದ್ದ ಹೊಂಡದಲ್ಲಿ ಬಿದ್ದುದು ಈ ಕ್ರೀಡಾಂಗಣ ನಿರ್ಮಾಣದ ಕಾಯಕಕ್ಕೆ ರೆಡ್ಡಿಯವರನ್ನು ಪ್ರೇರೇಪಿಸಿದ ಘಟನೆ.

ಇಂಥ ಸೇವಾ ಮನೋಭಾವದ ಅಧಿಕಾರಿಗಳು ಎಲ್ಲ ಊರುಗಳಲ್ಲೂ–ಕನಿಷ್ಠ ತಾಲ್ಲೂಕಿಗೊಬ್ಬೊಬ್ಬರಾದರೂ ಇದ್ದರೆ ನಮ್ಮ ದೇಶದ ಬಹುತೇಕ ಬೇಡಿಕೆಗಳು ಪೂರೈಸಿಯಾವು. **—ಹಾ. ಅ. ಗೋಪಾಲ್.**

---

ಈ ಲೇಖನ ಬರೆದ ನಮ್ಮ ಹಾ. ಅ. ಗೋಪಾಲ್ ಅವರು ಕೂಡ ಇಂಥ ನಿಃಸ್ವಾರ್ಥ ಸೇವೆಯಲ್ಲಿ ಕಡಿಮೆಯವರೇನಲ್ಲ. ಕೊಪ್ಪದ ಪೇಟೆಯ ನಡುಮಧ್ಯೆ ಇದೀಗ ರೂಪುಗೊಂಡಿರುವ 'ಪುರಸಭಾ ಕ್ರೀಡಾಂಗಣ'ವೇ ಇವರ ಇಂಥ ನಿಃಸ್ವಾರ್ಥ ದುಡಿಮೆಯ, ಛಲಬಿಡದ ಪ್ರಯತ್ನದ ಪ್ರತೀಕ.

ಈ ಹಿಂದೆ ಹರಿಹರಪುರ ಮತ್ತು ಕಮ್ಮರಡಿ ಪ್ರೌಢಶಾಲೆಗಳಲ್ಲಿ ಕೆಲಸ ಮಾಡಿದಾಗಲೂ ಅಲ್ಲಿನ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನೂ ನಾಗರಿಕರನ್ನೂ ಸಂಘಟಿಸಿ ಒಂದೊಂದು ಉತ್ತಮ ಕ್ರೀಡಾಂಗಣದ ನಿರ್ಮಾಣಕ್ಕೆ ಇವರು ಕಾರಣರಾಗಿದ್ದರು. —ಸಂಪಾದಕ.

## ರಾಜ್ಯ ಕ್ರೀಡಾ ಕೂಟಕ್ಕೆ

# ಡಿಂಪಲ್, ಮಾಲಾ ಮತ್ತು ಸುಬ್ಬಲಕ್ಷ್ಮಿ

### ಕೊಪ್ಪ ತಾಲ್ಲೂಕಿಗೆ ಸಮಗ್ರ ಪ್ರಶಸ್ತಿ

ಪ್ರೌಢಶಾಲಾ ಕ್ರೀಡಾ ಕೂಟದ ಚಕ್ರ ದೆಸೆತ ಸ್ಪರ್ಧೆಯಲ್ಲಿ ಈಗಾಗಲೇ ರಾಜ್ಯ ಮಟ್ಟದ ಕ್ರೀಡಾ ಕೂಟಕ್ಕೆ ಆಯ್ಕೆಯಾಗಿರುವ ಕೊಪ್ಪದ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಕು|| ಡಿಂಪಲ್ ಅಜಿಲಾ ಈಚೆಗೆ ಒಣಕಲ್‌ನಲ್ಲಿ ನಡೆದ ಗ್ರಾಮಾಂತರ ಕ್ರೀಡಾ ಕೂಟದ 100 ಮೀ. ಓಟ, ಎತ್ತರ ಜಿಗಿತ, ದೂರ ಜಿಗಿತ, ಗುಂಡೆಸೆತ ಹಾಗೂ ಚಕ್ರ ದೆಸೆತ ಸ್ಪರ್ಧೆಗಳಲ್ಲಿ ಪ್ರಥಮ ಸ್ಥಾನ ಗಳಿಸಿ ಎರಡಕ್ಕಿಂತ ಹೆಚ್ಚಿನ ಸ್ಪರ್ಧೆಗಳಲ್ಲಿ ಸ್ಥಾನ ಗಳಿಸಿದ ಕೂಟದ ಏಕೈಕ ಕ್ರೀಡಾ ಪಟುವಾಗಿ ರಾಜ್ಯ ಮಟ್ಟದ ಕ್ರೀಡಾ ಕೂಟಕ್ಕೆ ಆಯ್ಕೆಯಾಗಿದ್ದಾಳೆ.

ಹಿರೇಕೊಡಿಗೆಯ ಕು|| ಮಾಲಾ, 800 ಮೀ. ಓಟದಲ್ಲೂ, ಕುದುರೆಗುಂಡಿಯ ಕು|| ಸುಬ್ಬಲಕ್ಷ್ಮಿ 1500 ಮೀ. ಓಟದಲ್ಲೂ ಪ್ರಥಮ ಸ್ಥಾನ ಗಳಿಸಿ ರಾಜ್ಯ ಕ್ರೀಡೆಗೆ ಆಯ್ಕೆಯಾದರೆ, ಕುದುರೆಗುಂಡಿ ಹಿರಿಯ ಪ್ರಾಥಮಿಕ ಶಾಲಾ ತಂಡ 4x400 ಮೀ. ಹಾಗೂ ಕಬಡ್ಡಿಯಲ್ಲಿ ಪ್ರಥಮ ಸ್ಥಾನವನ್ನೂ ಖೋ–ಖೋದಲ್ಲಿ ದ್ವಿತೀಯ ಸ್ಥಾನವನ್ನೂ ಗಳಿಸಿದರು.

ಕೊಪ್ಪ ತಾಲ್ಲೂಕು ಬಾಲಕಿಯರ ವಿಭಾಗದಲ್ಲಿ 69 ಅಂಕ ಗಳಿಸಿ ಸಮಗ್ರ ಪ್ರಶಸ್ತಿ ಪಡೆಯಿತು.

---

ಸುದ್ದಿ – ವಿಶೇಷ

## 'ಭಿನ್ನ ಮತದ ಹೊಣೆ ನನ್ನದೇ' —ರಾಜೀವ್

ಪಕ್ಷ ಮತ್ತು ಸರಕಾರದಲ್ಲಿ ಇತ್ತೀಚೆಗೆ ಸಂಭವಿಸಿರುವ ಹಲವಾರು ವಿದ್ಯಮಾನಗಳ ಹೊಣೆಯನ್ನು ಒಪ್ಪಿಕೊಂಡಿರುವ ಪ್ರಧಾನಿ ರಾಜೀವ ಗಾಂಧಿ ಪಕ್ಷದ ಮಾಜಿ ಸಹೋದ್ಯೋಗಿಗಳು ತನ್ನನ್ನು ಅಲಕ್ಷಿಸುತ್ತಿದ್ದಾರೆ ಎಂಬ ಅಭಿಪ್ರಾಯ ತಳೆದಿದ್ದಾರೆ.

"ನನ್ನ ಸ್ವಂತ ಶಿಬಿರದಲ್ಲೇ ಅಸಮಾಧಾನದ ಹೊಗೆ ಹರಡಿದೆ ಎಂಬುದು ಬಹಳ ತಡವಾಗಿ ನನ್ನ ಅರಿವಿಗೆ ಬಂದಿದೆ" ಎಂದು 'ನ್ಯೂಯಾರ್ಕ್ ಟೈಮ್ಸ್'ನಲ್ಲಿ ಅ. 11 ರಂದು ಪ್ರಕಟವಾದ ಸಂದರ್ಶನವೊಂದರಲ್ಲಿ ಅವರು ತಿಳಿಸಿದ್ದಾರೆ.

ಸರಕಾರವನ್ನು ತೊರೆದಿರುವ ಹಾಗೂ ಪಕ್ಷದಿಂದ ಉಚ್ಚಾಟಿಸಲಾಗಿರುವ ಕೆಲವು ರಾಜಕೀಯ ಸ್ನೇಹಿತರು ಈಗ ತಮ್ಮನ್ನು ವಿರೋಧಿಸುತ್ತಿರುವ ಬಗ್ಗೆ ರಾಜೀವ ಗಾಂಧಿ ತೀವ್ರ ನಿರಾಶೆ ವ್ಯಕ್ತಪಡಿಸಿದರು.

'ಈ ಬೆಳವಣಿಗೆಗಳಿಗೆ ನಾನೇ ಹೊಣೆ

(3ನೇ ಪುಟಕ್ಕೆ)

ಸಿನಿಮಾ

# ಮೈಸೂರಿನ ಪ್ರತಿಭೆ - ವಿಜಯಾ ಸೋಮಣ್ಣ

ಕೊಡಗು ಕರ್ನಾಟಕದ ಸ್ವಿಟ್ಜರ್ಲೆಂಡ್. ಕೊಡಗಿನ ಯುವತಿಯರು ಬೆಡಗಿಯರು. ಇನ್ನು ಇಲ್ಲಿನ ಶೋಡಷಿ ಎಂದರೆ, ಎತ್ತರ ನಿಲುವಿನ, ತುಂಬು ಮೈಕಟ್ಟಿನ ಮಾದಕ ಚಲುವೆಯೇ ಆಗಿರಬೇಕು. ಹೌದು. ಆಕರ್ಷಕ ಅಂಗಸೌಷ್ಟವದ ವಿಜಯಾ ಸೋಮಣ್ಣ ಚಲನ ಚಿತ್ರರಂಗಕ್ಕೆ ಹೇಳಿ ಮಾಡಿಸಿದಂಥ ತಾರೆ.

'ಆರಂಭ' ಚಿತ್ರದ ನಾಯಕಿಯಾಗಿ ತನ್ನ ಚಲನಚಿತ್ರ ಜೀವನವನ್ನು ಭರ್ಜರಿಯಾಗಿ ಆರಂಭಿಸಿದ ವಿಜಯಾಗ ಮುಂದಿನ ದಿನಗಳು ಮಾತ್ರ ಸಪ್ಪೆಯಾಗಿಬಿಟ್ಟವು. 'ಆರಂಭ' ಬಿಡುಗಡೆಗೆ ಮೊದಲೇ ಸಾಕಷ್ಟು ಪ್ರಚಾರಗಳಿಸಿದ್ದ ಚಿತ್ರ. ಆದರೆ ಹಸಿ-ಹಸಿ ನಾಯಕ–ನಾಯಕಿಯರ ಪ್ರಚುತ್ನ ಮಾತ್ರ ಯಶಸ್ವಿಯಾಗಲಿಲ್ಲ ಚಿತ್ರ ಗೆಲ್ಲಲಾಗದ ಕಾರಣ ನಾಯಕಿಯೂ ಗಮನಕ್ಕೆ ಬಾರದೆ ಹೋದಳು.

'ಗಾಡ್‌ಫಾದರ್' ಇಲ್ಲದೇ ಚಿತ್ರ ರಂಗ ಪ್ರವೇಶಿಸಿದವರ ಗತಿಯೇ ಇಷ್ಟು ಎನ್ನುವಂತಾಗಿದೆ. ಜೂಲಿ, ಚಾವ್ಲಾ, ಖುಷ್‌ಬೂ, ಊರ್ವಶಿ ಮುಂತಾದ ಅಪುದು ತಾರೆಯರನ್ನು ಸರಿಗಟ್ಟಿ ನಿಲ್ಲುವ 19ರ ಯುವತಿ ವಿಜಯಾಳನ್ನು ಕನ್ನಡದ ನಿರ್ಮಾಪಕರು ನಿರ್ಲಕ್ಷಿಸುವುದೇಕೋ ತಿಳಿಯುತ್ತಿಲ್ಲ. ಹಿಂದಿನ ಯಾವುದೇ ಅನುಭವ ಇಲ್ಲದೇ, ಇತ್ತೀಚೆಗೆ ತಾನೇ ನೃತ್ಯ ಕಲಿತು ಇದೀಗ ಅಲ್ಪ–ಸ್ವಲ್ಪ ಅಭಿನಯದ ಪಾಠ ಕಲಿಯುತ್ತಿರುವ ವಿಜಯಾ ಸ್ವತಂತ್ರವಾಗಿ ಚಿತ್ರರಂಗಕ್ಕೆ ಕಾಲಿಟ್ಟವರಲ್ಲಿ ಮೊದಲಿಗಳು. ಕೇವಲ ಸೌಂದರ್ಯ – ದೇಹಸಂಪತ್ತಿನಿಂದ ಮಾತ್ರ ಚಿತ್ರರಂಗದಲ್ಲಿ ಉಳಿಯುವ ಸಾಧ್ಯತೆ ಇಲ್ಲ ಎನ್ನುವ ಪ್ರಜ್ಞೆ ಇರುವ ವಿಜಯಾ, ಪ್ರತಿಭೆ ಮತ್ತು ಸಾಧನೆಯನ್ನು ಒರೆಗಲ್ಲಿಗೆ ಹಚ್ಚಲು ಸಿದ್ಧಳಾಗಿದ್ದಾಳೆ.

ಯಾವುದೇ ಪಾತ್ರ ನಿರ್ವಹಿಸಲು ಸಿದ್ಧವಿರುವ ಈ ಕನ್ನಡತಿಗೆ ಕರೆಗಳೇ ಇಲ್ಲದಿರುವುದು ನಿರುತ್ಸಾಹವನ್ನೇನೂ ಮೂಡಿಸಿಲ್ಲ. ಯಾರ ಸಹಾಯವಿಲ್ಲದೆ ಬಂದಿರುವ ತಾನು ಗೆಲ್ಲುವೆನೆಂಬ ಛಲ ಹೊತ್ತು ನಿಂತಿದ್ದಾಳೆ. **ಈ ಛಲಕ್ಕೆ ಈಕೆಯ ಮೊದಲ ಚಿತ್ರದ ನಾಯಕ ಆಸರೆಯಾಗುವ ದಿನಗಳು ದೂರವಿಲ್ಲ ಎನ್ನುವ ಮಾತುಗಳಿವೆ.**

'ಆರಂಭ' ನಿರ್ಮಾಣ ಮಾಡಿದ ಹುಡುಗ, ಆದರ ನಾಯಕ ಉದಯ್ ಹುತ್ತಿನಗದ್ದೆ ತನ್ನ ಪ್ರಥಮ ನಾಯಕಿಯನ್ನು ನೋಡಿಬರಲು ಆಗಿಂದಾಗ್ಗೆ ಮೈಸೂರಿಗೆ ಗಾಡಿ ಓಡಿಸುತ್ತಿರುವುದು ಸುದ್ದಿಯಾಗಿದೆ. ಸುದ್ದಿಯಾಗದಿರಲೆಂದು ತನ್ನ ಬೈಕ್ ಬಿಟ್ಟು ಬೇರೆಯವರ ಬೈಕ್ ಓಡಿಸಿದರೂ ವಿಷಯ ಎಲ್ಲರಿಗೂ ತಿಳಿದಿದೆ. 'ಆರಂಭ'ವಾದ ನಂತರ ನಿಲ್ಲದೆ, ಹಿಂದಿರುಗಿ ನೋಡದೆ ಸತತವಾಗಿ ಮುಂದೆ ನುಗ್ಗುತ್ತಿರುವ ಉದಯ್ ವಿಜಯಾಗೆ ಸ್ವಯಂ ಆಸಕ್ತಿಯಿಂದ ಛಾನ್ಸ್ ಕೊಡಿಸಬಹುದು. ಹೇಗಾದರಾಗಲಿ ಕನ್ನಡದ ಪ್ರತಿಭೆಯೊಂದು ಪೋಲಾಗದೆ ಮಿಂಚಿದರೆ 'ನಮ್ಮವಳೆಂದು' ಬೆನ್ನು ತಟ್ಟಿ ಮುಂದೆ ತರಲು ನಾವೆಲ್ಲಾ ಸಿದ್ಧ.

(ಸೌಜನ್ಯ : 'ಆಂದೋಲನ', ಮೈಸೂರು)

## ಓದುಗರ ಪತ್ರಗಳು

### ಕೊಪ್ಪ-ಬಾಳಗಡಿ ರಸ್ತೆಯಲ್ಲಿ ವಾಹನಗಳು ದಾರಿಹೋಕರಿಗೆ ಪ್ರಾಣ ಭೀತಿ ಒಡ್ಡದಿರಲಿ

ಮಾನ್ಯರೆ,

ಕೊಪ್ಪ ಬಾಳಗಡಿ ಮಧ್ಯೆ ಇದೀಗ ಬಸ್ಸು-ಲಾರಿಗಳ ಮತ್ತು ಆಟೋರಿಕ್ಷಾಗಳ ಓಡಾಟ ವಿಪರೀತವಾಗಿ ಹೆಚ್ಚಿದೆ. ಈ ರಸ್ತೆಯಲ್ಲಿ ಸಾರ್ವಜನಿಕರ ಮತ್ತು ಮುಖ್ಯವಾಗಿ ಶಾಲಾ ಮಕ್ಕಳ ತಿರುಗಾಟ ತುಂಬಾ ಇರುತ್ತದೆ. ಸಾಲದ್ದಕ್ಕೆ ಜಾನುವಾರುಗಳು ಸಹ ತಿರುಗಾಡುತ್ತಿರುತ್ತವೆ.

ಈ ಪರಿಸ್ಥಿತಿಯಲ್ಲಿ ಇಲ್ಲಿ ಓಡಾಡುವ ಸಾರ್ವಜನಿಕರು ಮತ್ತು ಶಾಲಾ ಮಕ್ಕಳು ಪ್ರಾಣ ಭೀತಿಯಿಂದ ಓಡಾಡುವಂತಾಗದೆ ನೆಮ್ಮದಿಯಿಂದ ಓಡಾಡುವಂತೆ ಈ ವಾಹನಗಳು ತಮ್ಮ ವೇಗ ಮಿತಿಯನ್ನು ಕಾಯ್ದುಕೊಂಡು ಚಲಿಸುವ ರೀತಿಯಲ್ಲಿ ಕೊಪ್ಪ ಪೋಲೀಸರು ನಿಯಂತ್ರಿಸಬೇಕಾಗಿ ಈ ಮೂಲಕ ಅವರ ಗಮನಕ್ಕೆ ತರಬಯಸುತ್ತೇವೆ.

—ದಾರಿಹೋಕರು
(10 ಜನರ ಸಹಿಗಳಿವೆ.)

## ವಿದ್ಯುತ್ ಕಡಿತ: ತಾರತಮ್ಯ ತಪ್ಪಲಿ

ಮಾನ್ಯರೆ,

ಈಚೆಗೆ ರಾಜ್ಯದಲ್ಲಿ ವಿದ್ಯುತ್ ಅಭಾವವನ್ನು ಸರಿತೂಗಿಸಲು ಬಳಕೆಗೆ ಮಿತಿ ಹೇರಿರುವುದು ಸರಿಯಷ್ಟೆ. ಆದರೆ ಈ ಮಿತಿ ಅಥವಾ 'ಪವರ್ ಕಟ್' ಹಳ್ಳಿ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದೆ ಅದೂ ಅಲ್ಪಸ್ವಲ್ಪವಲ್ಲ. ದಿನಕ್ಕೆ 8 ಗಂಟೆಗಳು—ಬೆಳಗಿನ 6 ಘಂಟೆಯಿಂದ ಮಧ್ಯಾಹ್ನ 2 ಘಂಟೆಯವರೆಗೆ!

ಹೀಗೆ ಹಳ್ಳಿಗಳಿಗೆ ಮಾತ್ರ ಇಷ್ಟು ಅಗಾಧ ಹೊರೆ ಹೊರಿಸುವ ಬದಲು ಕೇವಲ ದಿನಕ್ಕೆ 3 ಘಂಟೆ ವಿದ್ಯುತ್ ನಿಲುಗಡೆಯನ್ನು ಪಟ್ಟಣಗಳಲ್ಲಿಯೂ ಮಾಡಿದರೆ ಬಹಳಷ್ಟು ವಿದ್ಯುತ್ ಉಳಿಯುವುದು ಮಾತ್ರವಲ್ಲ, ಹಳ್ಳಿಗಳ ಹೊರೆಯನ್ನೂ ಬಹಳಷ್ಟು ತಗ್ಗಿಸಬಹುದು. ಏಕೆಂದರೆ ಹಳ್ಳಿಗಳಲ್ಲಿಯೂ ವಿದ್ಯುತ್ ಅವಲಂಬಿತ ಕುಟುಂಬಗಳು ಬಹಳವಿರುತ್ತವೆ ಮಾಮೂಲಾಗಿ ಹೆಚ್ಚಿನ ತೊಂದರೆಗಳು ಈ ರೀತಿ ಇವೆ:

1. ಹಳ್ಳಿಯ ವಿದ್ಯಾರ್ಥಿಗಳಿಗೆ ಬೆಳಿಗ್ಗೆ ವ್ಯಾಸಂಗಕ್ಕೆ ಅಡಚಣೆ;
2. ಹಳ್ಳಿಯ ಶ್ರೀ ಸಾಮಾನ್ಯನಿಗೆ ಬೆಳಗಿನ ಪ್ರದೇಶ ಸಮಾಚಾರ, ವಾರ್ತೆಗಳನ್ನು ಕೇಳಲು ಅಡ್ಡಿ ಮತ್ತು ದೂರದರ್ಶನದ ಬೆಳಗಿನ ಕಾರ್ಯಕ್ರಮ ವೀಕ್ಷಿಸಲು ತಡೆ;
3. ಅಕ್ಕಿ ಗಿರಣಿ, ಹಿಟ್ಟಿನ ಗಿರಣಿಯಂಥ ಸಣ್ಣ ಕೈಗಾರಿಕೆಗಳಲ್ಲಿ ನಿತ್ಯದ ಗೋಳು;
4. ಮಿಕ್ಸಿ, ಗ್ರೈಂಡರ್, ಸ್ಟವ್ ಮುಂತಾದ ವಿದ್ಯುತ್ ಅಡಿಗೆ ಸಲಕರಣೆಗಳನ್ನು ಹೊಂದಿರುವವರು ಅವುಗಳನ್ನು ಉಪಯೋಗಿಸುವಂತಿಲ್ಲ

ಈ ಎಲ್ಲಾ ವಿಚಾರದಲ್ಲಿ ಹಳ್ಳಿಗ ಹಳ್ಳಿಗನಾಗೇ ಇರಲಿ ಎಂದು ಈ 8 ಘಂಟೆಗಳ 'ಕಡಿತ'ವನ್ನು ಹಳ್ಳಿಗಳಲ್ಲಿ ಮಾತ್ರ ಮಾಡಿ, ಪಟ್ಟಣವಾಸಿಗಳಿಗೆ ಭೋಗ ಜೀವನ ಮುಡುಪಾಗಿ ಇಟ್ಟಿರುವುದೆ? ಭೋಗಕ್ಕಾಗಿಯಲ್ಲದಿದ್ದರೂ ಕೇವಲ ಅವಶ್ಯಕತೆಗಾಗಿಯಾದರೂ ಹಳ್ಳಿಗಳಲ್ಲಿ ಬೆಳಿಗ್ಗೆ 6ರ ಬದಲು 8 ಘಂಟೆಯಿಂದ ಮಧ್ಯಾಹ್ನ 2 ಘಂಟೆವರೆಗಿನ 6 ಘಂಟೆಕಾಲ ಮಾತ್ರ ಕಡಿತ ಮಾಡಲಿ; ಹಾಗೆಯೇ ಪಟ್ಟಣಗಳಿಗೆ 2 ಅಥವಾ 3 ಗಂಟೆ ಕಡಿತವಿರಲಿ. ಉಳಿತಾಯದ ದೃಷ್ಟಿಯಿಂದ ಈ ಸಲಹೆ ಇಷ್ಟೆ. ಜೊತೆಗೆ ವಿದ್ಯುತ್ ಅಭಾವದ ಅರಿವು ಹಳ್ಳಿಗನಿಗೆ ಮಾತ್ರವಲ್ಲ ಪಟ್ಟಣವಾಸಿಗೂ ಸ್ವಲ್ಪವಾದರೂ ಆಗಲಿ.

21ನೇ ಶತಮಾನಕ್ಕೆ ಕರೆದೊಯ್ಯುವ ಬದಲು ಹಳ್ಳಿಗನನ್ನು 10ನೇ ಶತಮಾನಕ್ಕೆ ಹಿಂದೆ ತಳ್ಳುವ ಮಲತಾಯಿ ಧೋರಣೆಯ ಬದಲು ಈ ಮೇಲಿನಷ್ಟಾದರೂ ಬದಲಾವಣೆ ಆಗಲಿ ಎಂದು ಹಾರೈಸುವ,

ಹಳ್ಳಿಗರ ಪರವಾಗಿ
**ಹೊಸ್ಮನೆ ರಮೇಶ್, ಗಡೀಕಲ್**

## 'ಭಿನ್ನಮತದ ಹೊಣೆ ನನ್ನದೇ'

### —'ನ್ಯೂಯಾರ್ಕ್ ಟೈಮ್ಸ್' ಸಂದರ್ಶನದಲ್ಲಿ ರಾಜೀವ್

(2ನೇ ಪುಟದಿಂದ)
ಗಾರನೆಂಬುದನ್ನು ಖಂಡಿತವಾಗಿಯೂ ಒಪ್ಪಿಕೊಳ್ಳುತ್ತೇನೆ' ಎಂದವರು ಹೇಳಿದರು. 'ಇದರಿಂದಾಗಿ ನಾನು ಹತಾಶನಾಗಿದ್ದೇನೆ, ಅದಕ್ಕಿಂತಲೂ ಹೆಚ್ಚು ಅಲಕ್ಷಿತನಾಗಿದ್ದೇನೆ' ಎಂದು ಅವರು ದುಃಖಪಟ್ಟರು.

ಕಾಂಗ್ರೆಸೊಳಗೇ ಬಂಡಾಯವೊಂದನ್ನು ಉಂಟು ಮಾಡಲು ತಮ್ಮ ಕೆಲವು ವಿರೋಧಿಗಳು ಪ್ರಯತ್ನಿಸುತ್ತಿರುವುದರ ಬಗ್ಗೆ ಪ್ರಸ್ತಾಪಿಸಿದ ಅವರು, 'ಅವರು ಕಾಂಗ್ರೆಸ್‌ಗೇನೂ ಹಾನಿ ಮಾಡಲಾರರು. ಪ್ರಚಾರ ಮಾಧ್ಯಮಗಳೂ, ವಿರೋಧ ಪಕ್ಷಗಳ ಅತ್ಯಂತ ಹಿರಿಯ ರಾಜಕಾರಣಿಗಳೂ ಕಾಂಗ್ರೆಸ್‌ನಿಂದ ವ್ಯಾಪಕ ಪಕ್ಷಾಂತರ ನಡೆಯುವುದಾಗಿ ಪ್ರಚಾರ ಮಾಡಿದ್ದರು. ವಾಸ್ತವವಾಗಿ ವಿರೋಧಪಕ್ಷಗಳಿಗೇ ಒಂದಾಗಿ ಉಳಿಯಲು ಸಾಧ್ಯವಾಗಿಲ್ಲ' ಎಂದರು.

**ತನ್ನ ಸ್ಥಾನದಿಂದ ಮಾಡಬೇಕಾಗಿರುವ ಬಹಳಷ್ಟು ರಾಜಕಾರಣ ತನಗೆ ಕಷ್ಟವಾಗುತ್ತಿದೆ ಎಂದವರು ಹೇಳಿದರು.**

(ಸೌಜನ್ಯ : 'ಮುಂಗಾರು')

# "ಸಹಕಾರಿ ಚಳುವಳಿ ರಾಜಕೀಯ ಮುಕ್ತವಾಗಿರಲಿ"

— ಬಿ. ಎಲ್. ಶಂಕರ್

(ವರದಿ : ಕೃಷ್ಣ ಭಂಡಾರಿ)

ಜಯಪುರ : ಸಹಕಾರಿ ಕ್ಷೇತ್ರದ ಚಳುವಳಿ ರಾಜಕೀಯ ಹಸ್ತಕ್ಷೇಪ, ಪಕ್ಷಗಳ ಪಿಡುಗಿನಿಂದ ಮುಕ್ತವಾಗದೆ ಅಭಿವೃದ್ಧಿ ಸಾಧ್ಯವಿಲ್ಲ. ಈ ಚಳುವಳಿಯ ಯಶಸ್ಸಿನಿಂದ ಮಾತ್ರ ಗ್ರಾಮೀಣ ಪ್ರದೇಶದ ಜೀವನವನ್ನು ಉತ್ತಮಪಡಿಸಲು ಸಾಧ್ಯ. ಸಹಕಾರಿ ಕ್ಷೇತ್ರ ಬೆಳವಣಿಗೆಯಾಗದಿದ್ದಲ್ಲಿ ದೇಶದ ಆರ್ಥಿಕತೆ ದಿಕ್ಕು ತಪ್ಪುತ್ತದೆ. ದೇಶದ ಆರ್ಥಿಕ ಸ್ಥಿತಿ ಕುಂಠಿತಗೊಳ್ಳಲು ಹಾಗೂ ನಗರ ಪ್ರದೇಶದಲ್ಲಿ ಜನಸಂಖ್ಯೆ ಹೆಚ್ಚಳವಾಗಲು ಸ್ವಾತಂತ್ರ್ಯ ನಂತರ ಭಾರತ ಅನುಸರಿಸಿದ ಆರ್ಥಿಕ ಮತ್ತು ಕೃಷಿ ನೀತಿಯೇ ಕಾರಣ ಎಂದು ಜಿಲ್ಲಾ ಸಚಿವ ಬಿ. ಎಲ್. ಶಂಕರ್ ಅವರು ಇಲ್ಲಿಗೆ ಸಮೀಪದ ಕರಿಮನೆ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಸಿಬ್ಬಂದಿ ವರ್ಗದ ಕಟ್ಟಡದ ಶಂಕುಸ್ಥಾಪನೆಯನ್ನು ನೆರವೇರಿಸಿ ಮಾತನಾಡುತ್ತಾ ತಿಳಿಸಿದರು.

ಮುಖ್ಯ ಅತಿಥಿ ಬಿ. ಜಿ. ಚಿದಂಬರ್ ಮಾತನಾಡಿ, ಅತಿವೃಷ್ಟಿ, ಅನಾವೃಷ್ಟಿಯಲ್ಲಿ ಸಹಕಾರಿ ಕ್ಷೇತ್ರ ಅತಿ ಮುಖ್ಯ ಎಂದು ಹೇಳಿ, ಕಮರ್ಷಿಯಲ್ ಬ್ಯಾಂಕಿಗೆ ಸರಿಗಟ್ಟುವ ಸಾಧನೆ ಮಾಡಿದ ಈ ಬ್ಯಾಂಕಿನ ಸ್ಥಾಪಕ ದಿ|| ಕೃಷ್ಣರಾಯರನ್ನು ಸ್ಮರಿಸಿದರು. ಬ್ಯಾಂಕು ರಾಷ್ಟ್ರಪ್ರಶಸ್ತಿ ಪಡೆಯಲಿ ಎಂದು ಹಾರೈಸುತ್ತಾ, ಅಲ್ಪಾವಧಿ ಸಾಲ ಯೋಜನೆಯನ್ನು ರೂಪಿಸಲು ಸಲಹೆ ಇತ್ತರು.

ಡಿ. ಸಿ. ದಿವಾಕರ್ ಅವರು ಫಲಾನುಭವಿಗಳಿಗೆ ಸಾಲ ವಿತರಿಸಿ, ಪ್ರೌಢ ಶಾಲೆಯಲ್ಲಿ ಉತ್ತಮ ಅಂಕ ಪಡೆದ 6 ಮಂದಿ ಸಣ್ಣ ರೈತರ ಮಕ್ಕಳಿಗೆ ಬಹುಮಾನ ವಿತರಿಸಿ, ಸಿಬ್ಬಂದಿ ವರ್ಗದವರಿಗೆ ಬ್ಯಾಂಕಿನ ಪ್ರೋತ್ಸಾಹಕ ಕೊಡುಗೆಯಾದ 1 ತಿಂಗಳ ಹೆಚ್ಚುವರಿ ಸಂಬಳವನ್ನು ನೀಡಿದರು. ಸಹಕಾರಿ ಕ್ಷೇತ್ರದ ಹಣ ದುರುಪಯೋಗಿಗಳಿಗೆ ಕಠಿಣ ಶಿಕ್ಷೆ ವಿಧಿಸುವ ಕಾನೂನನ್ನು ತರಬೇಕು ಎಂದು ಅಭಿಪ್ರಾಯಪಟ್ಟರು.

ಅಧ್ಯಕ್ಷತೆ ವಹಿಸಿದ್ದ ಶಾಸಕ ಗೋವಿಂದಗೌಡರು ಮಾತನಾಡಿ, ಗ್ರಾಮೀಣ ಸಹಕಾರಿ ಕ್ಷೇತ್ರಕ್ಕೆ ವಾರ್ಷಿಕ ಶೇ. 20ರಷ್ಟು ಸಲ್ಲುತ್ತಿದ್ದ ಆದ್ಯತೆ 1983ರ ನಂತರ ಶೇ. 40ರಿಂದ 50ರಷ್ಟಾಗಿದೆ ಎಂದರು. ಕೃಷಿಯೇತರ ಉತ್ಪತ್ತಿಯಲ್ಲಿ ಸಣ್ಣ ರೈತರು ತೊಡಗಬೇಕು. ಹೊಸ ಹೊಸ ಯೋಜನೆಗಳು ಸಹಕಾರಿ ಕ್ಷೇತ್ರದಲ್ಲಿ ಬರುತ್ತಿದೆ. ಅದನ್ನು ರೈತರು ಸೂಕ್ತ ರೀತಿಯಲ್ಲಿ ಉಪಯೋಗಿಸಿಕೊಂಡು ಸಾಲವನ್ನು ಸೂಕ್ತ ಸಮಯದಲ್ಲಿ ಮರುಪಾವತಿ ಮಾಡಬೇಕು ಎಂದು ಕರೆಯಿತ್ತರಲ್ಲದೆ, ಸಹಕಾರಿ ಕ್ಷೇತ್ರದಲ್ಲಿ ಬ್ಯಾಂಕಿನ ಈ ಹಿಂದಿನ ಅಧ್ಯಕ್ಷ ಡಾ|| ಯೋಗಪ್ಪನವರ ಉತ್ತಮ ಕೆಲಸವನ್ನು ಶ್ಲಾಘಿಸಿ, ಅವರ ಮೇಲ್ಪಂಕ್ತಿಯನ್ನು ಅನುಸರಿಸಲು ಕರೆ ನೀಡಿದರು. ಈ ಸಾಲಿನಲ್ಲಿ 3.13 ಲಕ್ಷ ರೂ. ಲಾಭ ಗಳಿಸಿದ ಬ್ಯಾಂಕನ್ನು ಅಭಿನಂದಿಸಿದರು. ಬ್ಯಾಂಕಿನ ಅಧ್ಯಕ್ಷ ಕೆ. ಆರ್. ಚಂದ್ರಶೇಖರ್ ಸ್ವಾಗತಿಸಿ, ಎ. ಸಿ. ವಜ್ರಪ್ಪ ವಂದಿಸಿದರು

---

ಈ 'ಅದ್ದೂರಿ' ಸಮಾರಂಭದಲ್ಲಿ ವೇದಿಕೆಯ ಮೇಲೆ ಗಣ್ಯರು, ಅಧಿಕಾರಿಗಳ ಹಿಂಡೇ ತುಂಬಿದ್ದರೂ, ಅದೇ ಸಮಾರಂಭದಲ್ಲಿ ಹಾಜರಿದ್ದ ಜಿಲ್ಲಾ ಪರಿಷತ್ ಸದಸ್ಯ ಎಚ್. ಎಂ. ಮಾಸ್ತಿ ಅವರಾರಿಗೂ 'ಗಣ್ಯ'ರಾಗಿ ಕಾಣಲೇ ಇಲ್ಲ! ದೂರದ ಮೂಲೆಯ ಬೆಂಚೊಂದರ ಮೇಲೆ ಕೂತಿದ್ದ ಅವರ ಕಡೆ ವೇದಿಕೆಯಲ್ಲಿದ್ದ ಅವರ ಜಿ. ಪ. ಸಹೋದ್ಯೋಗಿಗಳ ಗಮನ ಕೂಡ ಹರಿಯಲಿಲ್ಲ.

ಕೊನೆಗೆ ಪ್ರೇಕ್ಷಕರ ನಡುವೆ ಇದ್ದ ಶೃಂಗೇರಿಯ ಶೇಷಾದ್ರಿ ಭಟ್ ಮತ್ತು ಸುರೇಂದ್ರ ಅವರುಗಳು ಈ ಲೋಪವನ್ನು ವ್ಯವಸ್ಥಾಪಕರಿಗೆ ತೋರಿಸಿಕೊಟ್ಟ ಮೇಲೆ, ಮಾಸ್ತಿಯವರಿಗೆ ವೇದಿಕೆಯ ಹಿಂದಿನ ಸಾಲಿನಲ್ಲಿ ಜಾಗ ದೊರೆಯಿತು.

ಇದೇಕೆ ಹೀಗೆ? 'ಮೀಸಲಾತಿಯಿಂದ ಆಯ್ದು ಬಂದ ಪ್ರತಿನಿಧಿಗಳು ಯಾವ ಲೆಕ್ಕಕ್ಕೂ ಇಲ್ಲ' ಎಂಬ ಕಟು ಸತ್ಯಕ್ಕೆ ಇದು ದೃಷ್ಟಾಂತವಲ್ಲವೆ? ಅದೇ ಒಬ್ಬ ಬಾಯಿ ಬಲ್ಲ ಪಂಗಡದ ವ್ಯಕ್ತಿಯಾಗಿದ್ದರೆ ಅಂದು ಇಡೀ ಸಮಾರಂಭವೇ ಗೊಂದಲದಲ್ಲಿ ರದ್ದಾಗುವ ಅಥವಾ ಬರ್ಖಾಸ್ತು ಆಗುವ ಸಂಭವವನ್ನು ತಳ್ಳಿ ಹಾಕುವಂತಿರಲಿಲ್ಲ, ಅಲ್ಲವೇ?

---

## ಹಕ್ಕುಪತ್ರಕ್ಕೆ ಒತ್ತಾಯ

(1ನೇ ಪುಟದಿಂದ)

ಸಾಲ ಪಡೆಯುವವರಿಗೆ ಮಾತ್ರ ಅಡ್ಡಿಯಾಗಿದೆ ಎಂದು ತಿಳಿದು ಬಂದಿದೆ.

ಇಂಥ 'ಮಂಜೂರಾತಿ'ಗಾಗಿ ಜಿಲ್ಲಾಧಿಕಾರಿ ಕಚೇರಿಗೆ ಕಳಿಸಲ್ಪಟ್ಟ ಕೆಲ ಪ್ರಕರಣಗಳ ಬಗ್ಗೆ ಜಿಲ್ಲಾಧಿಕಾರಿಗಳು ಜಿಲ್ಲಾ ಪರಿಷತ್ ರಚನೆಯ ವೇಳೆ ಇದ್ದ ಸಂಶಯಗಳನ್ನು ಪರಿಹರಿಸಿಕೊಳ್ಳಲು ಸರ್ಕಾರದಿಂದ ಮಾರ್ಗದರ್ಶನ ಕೇಳಿದಾಗ "ಮುಂದಿನ ಆದೇಶ ಬರುವವರೆಗೂ ಇಂಥ ಎಲ್ಲ ಪ್ರಕರಣಗಳನ್ನೂ ಪೆಂಡಿಂಗ್ ಇಡುವಂತೆ" 'ಮಾರ್ಗದರ್ಶನ'(!) ಬಂದಿದೆಯೆಂದು ಗೊತ್ತಾಗಿದೆ.

ಈಗ ಈ ಬಗ್ಗೆ ಶಾಸಕ ಗೋವಿಂದಗೌಡರಿಗೂ ನಗರಾಭಿವೃದ್ಧಿ ಸಚಿವರಿಗೂ ಇದೇ ಮನವಿಯನ್ನು ಕಳಿಸಲಾಗಿದ್ದು, ಅವರುಗಳು ಈ ಕಲ್ಲೂ ಚಪ್ಪಡಿಯನ್ನೂ ಸರಿಸಿ, ಮನೆ ಕಟ್ಟಿಕೊಳ್ಳಬಯಸಿ ನಿವೇಶನಕ್ಕಾಗಿ ಈಗಾಗಲೇ ಸಾಲ-ಸೋಲ ಕೈಕೊಳಗಾರುವ ಸಾಮಾನ್ಯರಿಗೆ ತಡವಾಗಿಯಾದರೂ ಪ್ರಯೋಜನ ದೊರಕಿಸಿಕೊಡಲು ಮುಂದಾಗಬೇಕಾಗಿದೆ.

---

## ರಾಷ್ಟ್ರೋತ್ಥಾನ ಬಳಗದಿಂದ ವೈದ್ಯಕೀಯ ಸೇವಾ ಶಿಬಿರ

ಹರಿಹರಪುರದಲ್ಲಿ ರಾಷ್ಟ್ರೋತ್ಥಾನ ಬಳಗದ ಆಶ್ರಯದಲ್ಲಿ ಹರಿಹರಪುರ ಮತ್ತು ಆಸುಪಾಸಿನ ಗ್ರಾಮಸ್ಥರ ಅನುಕೂಲಕ್ಕೋಸ್ಕರ ಸೆ. 20ರಂದು ಉಚಿತ ವೈದ್ಯಕೀಯ ಶಿಬಿರ ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಶಿವಮೊಗ್ಗದ ದಂತ ವೈದ್ಯ ಡಾ|| ಮಂಜುನಾಥ್, ಮೂಳೆ ತಜ್ಞ ಡಾ|| ಬಸವರಾಜ್ ವಾರದ್, ಚರ್ಮ ರೋಗ ತಜ್ಞ ಡಾ|| ಸೀತಾರಾಮ್, ನೇತ್ರತಜ್ಞ ಡಾ|| ಜಯಂತರಾವ್, ಮಕ್ಕಳ ತಜ್ಞರಾದ ಶೃಂಗೇರಿಯ ವೈದ್ಯಾಧಿಕಾರಿ ಡಾ|| ಲಕ್ಷ್ಮೀನಾರಾಯಣ, ಸ್ತ್ರೀರೋಗ ತಜ್ಞೆ ಡಾ|| ಗಾಯತ್ರಿ ಮತ್ತು ಡಾ|| ವೀಣಾಕುಮಾರಿ ಇವರುಗಳು ಸುಮಾರು 450 ರೋಗಿಗಳನ್ನು ಪರೀಕ್ಷಿಸಿ ಉಚಿತವಾಗಿ ಔಷಧಿಗಳನ್ನು ನೀಡಿದರು.

ಈ ಸಂದರ್ಭದಲ್ಲಿ ಮಕ್ಕಳ ಪ್ರದರ್ಶನ ಏರ್ಪಾಡಾಗಿದ್ದು ವಿಜೇತ ಮಕ್ಕಳಿಗೆ ಬಹುಮಾನಗಳನ್ನು ವಿತರಿಸಲಾಯಿತು. ಅಧ್ಯಾಪಕರಾದ ಕೊನಗಳ್ಳಿ ವೆಂಕಟೇಶ್, ರೋಗಿಗಳಿಗೆ ಉಚಿತ ಉಪಾಹಾರದ ವ್ಯವಸ್ಥೆ ಮಾಡಿದ್ದರು.

---

### ಶಿವಮೊಗ್ಗ ಅಡಿಕೆ ಧಾರಣೆ

ತಾ|| 16.10.1987

ಸರಕು : 3600 – 4950

ಬೆಟ್ಟೆ : 2216 – 2832

ಗೊರಬಲು : 871 – 1069

### ಸಾಗರ ಅಡಿಕೆ ತಾ|| 16.10.1987

ಇಡಿ ಅಡಿಕೆ ರೂ. 2031–2269

ಚಾಲಿ ರೂ. 1279–1416

ಸಿಪ್ಪೆ ಗೋಟು ರೂ. 549–730

ಅಪಿ ರೂ. 4139 – 4589

### ಮಂಗಳೂರು ಏಲಕ್ಕಿ ಧಾರಣೆ

ದಿನಾಂಕ 16-10-1987

ರೂ. 90 – 150

ಕಾಳು ಮೆಣಸು 5392

### ಸಕಲೇಶಪುರ ಏಲಕ್ಕಿ ಧಾರಣೆ

ತಾ|| 16-10-1987

ಏಲಕ್ಕಿ ರೂ. 200ರಿಂದ 210, ಜರಡಿ ರೂ. 180ರಿಂದ 190, ಉತ್ತಮ ರೂ. 150ರಿಂದ 160, ಕೂಳೆ ರೂ. 110ರಿಂದ 120, ಬೀಜ ರೂ. 110ರಿಂದ 115. ಕರಿಮೆಣಸು ರೂ. 55ರಿಂದ 56

---

# ಸಂಕ್ಷಿಪ್ತ ಸುದ್ದಿಗಳು

### ಗಾಳಿ–ಮಳೆಯಿಂದ ಅಡಿಕೆ ತೋಟಕ್ಕೆ ಹಾನಿ

ಗುಡ್ಡೇತೋಟ : ಈಚೆಗೆ ಭಾರಿ ಗಾಳಿ–ಮಳೆಯಿಂದಾಗಿ ಹಲವಾರು ಅಡಿಕೆ ತೋಟಗಳಲ್ಲಿ ಮರಗಳು ಮುರಿದು ಬಿದ್ದು ದೊಡ್ಡ ಪ್ರಮಾಣದಲ್ಲಿ ನಷ್ಟ ಸಂಭವಿಸಿರುವ ಕುರಿತು ತಹಸೀಲ್ದಾರರ ಮೂಲಕ ಸರ್ಕಾರದ ಗಮನ ಸೆಳೆಯುವ ಬಗ್ಗೆ ಇತ್ತೀಚೆಗೆ ಇಲ್ಲಿನ ಚಿತ್ರಕೂಟ ಎಸ್ಟೇಟಿನಲ್ಲಿ ಗ್ರಾಮದ ರೈತರು ಸಭೆ ಸೇರಿ ಸಮಾಲೋಚಿಸಿದರು. ಮೊದಲೇ ಪ್ರಕೃತಿ ವಿಕೋಪದಿಂದ ತೊಂದರೆಗೀಡಾಗಿದ್ದ ರೈತರಿಗೆ ಈ ಗಾಳಿ–ಮಳೆಯಿಂದ ಗಾಯದ ಮೇಲೆ ಬರೆ ಎಳೆದಂತಾಗಿದೆ.

(ವರದಿ : ಎಂ. ವಿ ಗಂಗಾಧರ್.)

### ಶ್ರಮದಾನ

ಕಲ್ಲುಗುಡ್ಡೆ : ಇಲ್ಲಿನ ವಿವೇಕಾನಂದ [illegible] ರೈತ ಸಂಘದ ಸದಸ್ಯರು ಅ. 12ರಂದು ಕಲ್ಲುಗುಡ್ಡೆಯಿಂದ ಶಾಂತಿಗ್ರಾಮ ಮತ್ತು ಬಿಳಾಲ್‌ಕೊಪ್ಪಕ್ಕೆ ಹೋಗುವ ಮುಖ್ಯ ದಾರಿಗಳನ್ನು ರಿಪೇರಿ ಮಾಡಿದ್ದಾರೆ ಸಂಘದ 22 ಸದಸ್ಯರು ಬಹಳ ಉತ್ಸಾಹದಿಂದ ಈ ಕಾರ್ಯದಲ್ಲಿ ಭಾಗವಹಿಸಿದ್ದರು.

(ವರದಿ: ತ. ವಿ. ಮೂರ್ತಿ)

### ಮಹಿಳಾ ಕ್ರೀಡಾ ಕೂಟ : ಸಿಪಿಎಡ್ ವಿದ್ಯಾರ್ಥಿನಿಯರಿಗೆ ಪ್ರಶಸ್ತಿ

ಕೊಪ್ಪ : ಬಂಡಿಗಡಿಯಲ್ಲಿ ನಡೆದ ಮಹಿಳಾ ಕ್ರೀಡಾಕೂಟದಲ್ಲಿ ಇಲ್ಲಿನ ಲಿಬರಲ್ ಸಿಪಿಎಡ್ ಕಾಲೇಜಿನ ಸರ್ವಮಂಗಳಾ 100, 400, 800 ಮೀ. ಓಟದಲ್ಲಿ ಮೊದಲ ಸ್ಥಾನವನ್ನೂ, ಕೆ. ಕೆ. ಲತಾ 100, 400, 800 ಮೀ. ಓಟ, ಉದ್ದ ಜಿಗಿತ, ಎತ್ತರ ಜಿಗಿತಗಳಲ್ಲಿ 3ನೇ ಸ್ಥಾನವನ್ನೂ, ಕಬ್ಬಡಿ–ಖೊ ಖೋಗಳಲ್ಲಿ ಎರಡನೇ ಸ್ಥಾನವನ್ನೂ ಪಡೆದಿದ್ದಾರೆ.